RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜನವರಿ ೨೪, ೨೦೧೩ (ಮಾಘ ೪, ಶಕ ವರ್ಷ ೧೯೩೪)<br>Bangalore, Thursday, January 24, 2013 (Magha 4, Shaka Varsha 1934) | ಸಂಚಿಕೆ ೪<br>Issue 4 |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಾರಿಇ 168 ಸ್ವೀರಸ 2012, ಬೆಂಗಳೂರು, ದಿನಾಂಕ 17–11–2012**

ಸಾರ್ವಜನಿಕ ಮಾಹಿತಿ ಅರ್ಜಿಗಳ ವಿಲೇವಾರಿಯನ್ನು ಅಧಿನಿಯಮದನ್ವಯ ನಿಗಧಿತ ಅವಧಿಯಲ್ಲಿ ವಿಲೇವಾರಿ ಮಾಡುವುದನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸುವ ಉದ್ದೇಶದಿಂದ ಅಧಿಸೂಚನೆ ಸಂಖ್ಯೆ ಸಾರಿಇ 171 ಸ್ವೀರಸ 2011, ದಿನಾಂಕ : 03–09–2011ನ್ನು ಭಾಗಶಃ ಬದಲಾವಣೆ ಮಾಡಿ ಈ ಕೆಳಕಂಡಂತೆ ಸಾರಿಗೆ ಸಚಿವಾಲಯದ ಸಾರ್ವಜನಿಕ ಮಾಹಿತಿ ಅಧಿಕಾರಿಗಳಾಗಿ/ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಬದಲಾವಣೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ರಾಜ್ಯ ಸಾರಿಗೆ ಸಚಿವಾಲಯದ ಸಾರ್ವಜನಿಕ ಮಾಹಿತಿ ಅಧಿಕಾರಿಗಳಾಗಿ ನೇಮಕಾತಿ ಮಾಡಲಾದ ಅಧಿಕಾರಿಗಳ ಹೆಸರು, ಹುದ್ದೆ ಇತ್ಯಾದಿ | ಷರಾ |
|---|---|---|
| 1 | ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಸಾರಿಗೆ–1 ಶಾಖೆ | ಶ್ರೀ ರಾಮಮೂರ್ತಿ, ಶಾಖಾಧಿಕಾರಿ, ಸಾರಿಗೆ–1 ಶಾಖೆ ಇವರ ವರ್ಗಾವಣೆಯಿಂದ ತೆರವಾದ ಸ್ಥಳಕ್ಕೆ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ನೇಮಿಸಿದೆ. |
| 2 | ಶ್ರೀ ಶೇಖರ, ಶಾಖಾಧಿಕಾರಿ, ಸ್ವೀಕೃತಿ/ಸಮನ್ವಯ ಶಾಖೆ. | ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರ ವರ್ಗಾವಣೆಯಿಂದ ತೆರವಾದ ಸ್ಥಳಕ್ಕೆ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ನೇಮಿಸಿದೆ. |
| 3 | ಶ್ರೀ ಕಾಂತವೀರಯ್ಯ, ಹಿರಿಯ ಸಹಾಯಕರು, ಸಾರಿಗೆ–2 ಶಾಖೆ | ಶ್ರೀ ಪ್ರಕಾಶ್, ಹಿರಿಯ ಸಹಾಯಕರು, ಸಾರಿಗೆ–2 ಶಾಖೆ, ಇವರ ವರ್ಗಾವಣೆಯಿಂದ ತೆರವಾದ ಸ್ಥಳಕ್ಕೆ ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ನೇಮಿಸಿದೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೀರೇಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

**P.R. 1469**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಾಇ 56 ಕಾಬಾಸೇ 2012, ಬೆಂಗಳೂರು, ದಿನಾಂಕ 08–11–2012**

ಗುಲ್ಬರ್ಗಾ ವಿಭಾಗದಲ್ಲಿರುವ ಸಿಮೆಂಟ್ ಕಾರ್ಖಾನೆಗಳಲ್ಲಿ, ಸಕ್ಕರೆ ಕಾರ್ಖಾನೆಗಳಲ್ಲಿ ಹಾಗೂ ವಿದ್ಯುತ್ ಉತ್ಪಾದನಾ ಘಟಕಗಳಲ್ಲಿ 150ಕ್ಕೂ ಹೆಚ್ಚು ಅಧಿಕ ಕಾರ್ಯ ಒತ್ತಡ, ಬಾಯ್ಲರುಗಳು ಕಾರ್ಯನಿರ್ವಹಿಸುತ್ತಿದ್ದು, ಇವುಗಳ ಉಸ್ತುವಾರಿಗೆ ಹಾಗೂ ಕಾರ್ಖಾನೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರ ಸುರಕ್ಷತೆಯ ದೃಷ್ಟಿಯಿಂದ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಬಾಯ್ಲರುಗಳ ಸಹಾಯಕ ನಿರ್ದೇಶಕರ ವೃಂದದಲ್ಲಿ ಕೆಲಸ ಮಾಡುತ್ತಿರುವ ಒಬ್ಬ ಹಿರಿಯ ಅನುಭವಿ ಅಧಿಕಾರಿಯನ್ನು ನಿಯೋಜಿಸಲು ಗುಲ್ಬರ್ಗಾ ಜಿಲ್ಲಾ ಉಸ್ತುವಾರಿ ಮಂತ್ರಿಗಳು ಸಾರ್ವಜನಿಕ ಹಿತದೃಷ್ಟಿಯಿಂದ ವಿನಂತಿಸಿದ ಹಿನ್ನೆಲೆಯಲ್ಲಿ ಮಾನ್ಯ ಕಾರ್ಮಿಕ ಸಚಿವರು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಬಾಯ್ಲರುಗಳ ಸಹಾಯಕ ನಿರ್ದೇಶಕರುಗಳ ಪೈಕಿ ಹಿರಿಯ ಅಧಿಕಾರಿಯಾದ ಹಾಗೂ ಹಾಲಿ ಬಾಯ್ಲರುಗಳ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಂ. ಹೆಚ್. ಚಿಕ್ಕಮುನಿಯಪ್ಪ, ಇವರನ್ನು ಗುಲ್ಬರ್ಗಾ ವಿಭಾಗಕ್ಕೆ ಬಾಯ್ಲರುಗಳ ವರ್ಗಾಯಿಸಲು ನೀಡಿರುವ ಸಲಹೆಯನ್ನು ಮಾನ್ಯ ಮುಖ್ಯ ಮಂತ್ರಿಗಳು ಒಪ್ಪಿರುವ ಹಿನ್ನೆಲೆಯಲ್ಲಿ ಕಾರ್ಮಿಕರ ಸುರಕ್ಷತೆಯ ದೃಷ್ಟಿಯಿಂದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಕೆಳಗೆ ಕಾಣಿಸಿದ ಅಧಿಕಾರಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಲಾದ ಸ್ಥಳಕ್ಕೆ ವರ್ಗಾಯಿಸಿ ನೇಮಿಸಲಾಗಿದೆ :

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಮತ್ತು ಹಾಲಿ ಕೆಲಸ ಮಾಡುತ್ತಿರುವ ಹುದ್ದೆ | ವರ್ಗಾವಣೆ ಮಾಡಲಾದ ಸ್ಥಳ ಮತ್ತು ಹುದ್ದೆ |
|---|---|---|
| 1 | ಶ್ರೀ ಎಂ. ಹೆಚ್. ಚಿಕ್ಕಮುನಿಯಪ್ಪ, ಬಾಯ್ಲರುಗಳ ಸಹಾಯಕ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು | ಬಾಯ್ಲರುಗಳ ಸಹಾಯಕ ನಿರ್ದೇಶಕರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ (ಶ್ರೀ ಎಸ್. ಆರ್. ಶ್ರೀನಿವಾಸ್ ಇವರ ಜಾಗಕ್ಕೆ) |
| 2 | ಶ್ರೀ ಎಸ್. ಆರ್. ಶ್ರೀನಿವಾಸ್, ಬಾಯ್ಲರುಗಳ ಸಹಾಯಕ ನಿರ್ದೇಶಕರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ. | ಬಾಯ್ಲರುಗಳ ಸಹಾಯಕ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು (ಶ್ರೀ ಎಂ. ಹೆಚ್. ಚಿಕ್ಕಮುನಿಯಪ್ಪ ಇವರ ಜಾಗಕ್ಕೆ). |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರಾಮ ಗೌಡ,**

ಸರ್ಕಾರದ ಅಧೀನ ಕಾರ್ಯದರ್ಶಿ,

P.R. 1470 ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು)

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–1, ಚಿಕ್ಕಮಗಳೂರು ಜಿಲ್ಲೆ

### ಪ್ರಕಟಣೆ

**ಸಂಖ್ಯೆ : ಇಸಿಎ/ಎಫ್/09/2012, ದಿನಾಂಕ 08/19ನೇ ನವೆಂಬರ್, 2012**

**ಅರ್ಜಿದಾರರು :–**

1) ಶ್ರೀಮತಿ ಎಂ. ಕೆ. ಶ್ರೀಮತಿ ಕೋಂ ಲೇಟ್ ಧರ್ಣೇಶ್

2) ಕು॥ ಮೊಯಿನಾ ಬಿನ್ ಲೇಟ್ ಧರ್ಣೇಶ್

3) ಕು॥ ಮೇಘ ಬಿನ್ ಲೇಟ್ ಧರ್ಣೇಶ್

4) ದೇವೇಗೌಡ ಬಿನ್ ದಾಸೇಗೌಡ

5) ಶ್ರೀಮತಿ ಗೌರಮ್ಮ ಕೋಂ ದೇವೇಗೌಡ

ವಾಸ : ಕಟ್ಟೆಗದ್ದೆ ವಿಲೇಜ್, ಹೇರೂರು ಅಂಚೆ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

–ವಿ–

**ಪ್ರತಿವಾದಿಗಳು :–**

ಹೆಚ್ ಸಿ. ಡಿಸೋಜಾ ಬಿನ್ ಎಂ. ಡಿ. ಡಿಸೋಜಾ, ಅವಲಗಿರಿ ಎಸ್ಟೇಟ್, ಬಸರೀಕಟ್ಟೆ, ಕೊಪ್ಪ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

ಅರ್ಜಿದಾರರಾದ ಶ್ರೀಮತಿ ಎಂ. ಕೆ. ಶ್ರೀಮತಿ ಕೋಂ ಲೇಟ್ ಧರ್ಣೇಶ್ ಇವರು ಧರ್ಣೇಶ್ ರವರು ದಿನಾಂಕ : 22–03–2012ರಂದು ಪ್ರತಿವಾದಿಯ ಆದೇಶದ ಮೇರೆಗೆ ಪ್ರತಿವಾದಿಯ ತೋಟದಲ್ಲಿ ಮರಗಸಿ ಕಾರ್ಯವನ್ನು ನಿರ್ವಹಿಸುತ್ತಿರುವಾಗ ಆಕಸ್ಮಿಕವಾಗಿ ಮರದಿಂದ ಬಿದ್ದು ತೀವ್ರ ತರವಾದ ಪೆಟ್ಟಿಗೆ ತುತ್ತಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿ, ತಾವು ಮೃತರ ಅವಲಂಬಿತರೆಂದು ತಿಳಿಸಿ ಪರಿಹಾರವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಭಿತರು "ಯಾರೂ ಇಲ್ಲ" ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ–1, ಚಿಕ್ಕಮಗಳೂರು.

P.R. 1471

## ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹೊನ್ನಾವರ ವಿಭಾಗ, ಹೊನ್ನಾವರ ರವರ ನ್ಯಾಯಾಲಯದಲ್ಲಿ ಕಳ್ಳಸಾಗಾಣಿಕೆ ವಾಹನದ ಕುರಿತು ಪ್ರಕಟಣೆ

**ಕ್ರಮ ಸಂಖ್ಯೆ : ಸಿ3/ಎಫ್ಐಆರ್–6/ಗಸ್ತು ಅರ/ಮಂಕಿ/2010–11, ಹೊನ್ನಾವರ, ದಿನಾಂಕ 06ನೇ ಸೆಪ್ಟೆಂಬರ್, 2012**

ದಿನಾಂಕ : 02–01–2011ರಂದು ಬೆಳಗಿನ 8–00 ಘಂಟೆ ಸಮಯಕ್ಕೆ ಮಂಕಿ ವಲಯದ ಕಛೇರಿ ಎದುರುಗಡೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಓಮಿನಿ ವಾಹನ ನೋಂದಣಿ ಸಂಖ್ಯೆ : KA-04/M-3820ರಲ್ಲಿ ಅಕ್ರಮವಾಗಿ ನಂದಿ ಜಾತಿಯ ನಾಟುಗಳನ್ನು ತುಂಬಿಕೊಂಡು ಕಳ್ಳಸಾಗಾಣಿಕೆಯಲ್ಲಿ ಸಾಗಾಟಪಡಿಸುತ್ತಿದ್ದಾಗ, ವಲಯ ಅರಣ್ಯಾಧಿಕಾರಿ, ಮಂಕಿ ರವರು ಅಟಕಾಯಿಸಿ ಪ್ರಥಮ ಮಾಹಿತಿ ವರದಿ ಸಂಖ್ಯೆ : 3/2010–11, ದಿನಾಂಕ: 02–01–2011ರಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 24(e), 71a ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144, 145, 165ರ ಉಲ್ಲಂಘನೆ ಮೇರೆಗೆ ಗುನ್ನೆ ಪ್ರಕರಣ ದಾಖಲಿಸಿ ವಾಹನ ಸಂಖ್ಯೆ : KA-04/M-3820ನ್ನು ಅರಣ್ಯ ಉತ್ಪನ್ನ ಸಮೇತ ಜಪ್ತಪಡಿಸಿ ಪಂಚನಾಮೆಯಿಂದ ಅಮಾನತ್ತುಪಡಿಸಿಕೊಂಡು ಅರಣ್ಯ ಕಾಯ್ದೆ 1963ರ ನಿಯಮ 71(ಎ) ಯಿಂದ (ಜಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳ ಸಮಕ್ಷಮ ಹಾಜರುಪಡಿಸಿರುತ್ತಾರೆ. ಈ ರೀತಿ ವಶಪಡಿಸಿಕೊಂಡಿರುವ ವಾಹನದ ನೋಂದಾಯಿತ ಮಾಲೀಕತ್ವದ ವಿವರಗಳ ಕುರಿತಾಗಿ ದಿನಾಂಕ : 24–05–2011 ರಿಂದ ಇಲ್ಲಿಯವರೆಗೆ ಸಾರಿಗೆ ಪ್ರಾಧಿಕಾರದಲ್ಲಿ ಪತ್ರ ವ್ಯವಹರಿಸಲಾಗಿ, ಈವರೆಗೂ ವಾಹನ ಮಾಲೀಕತ್ವದ ವಿವರಗಳು ಈ ಕಛೇರಿಗೆ ಸ್ವೀಕೃತವಾಗಿರುವುದಿಲ್ಲ. ಅಲ್ಲದೇ, ಸದರ ವಾಹನ ತನ್ನದೆಂದು ಈವರೆಗೂ ಯಾರೂ ಈ ನ್ಯಾಯಾಲಯದಲ್ಲಿ ಕೋರಿಕೆ ಸಲ್ಲಿಸಿರುವುದಿಲ್ಲ.

ಆದ್ದರಿಂದ, ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) ರಿಂದ (ಜಿ) 1 ಮತ್ತು 2ನೇ ತಿದ್ದುಪಡಿ ಪ್ರಕಾರ ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವ ವಾಹನ ಸಂಖ್ಯೆ : KA-04/M-3820 ನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವ ಬಗ್ಗೆ ಸದರ ವಾಹನದ ಹಕ್ಕುಳ್ಳವರು ಮೂಲ ಆರ್.ಸಿ. ಹಾಗೂ ಟ್ಯಾಕ್ಸ್ ಕಾರ್ಡನೊಂದಿಗೆ 15 (ಹದಿನೈದು) ದಿನಗಳ ಒಳಗೆ ಖುದ್ದಾಗಿ ವಕೀಲರ ಮೂಲಕ ಈ ನ್ಯಾಯಾಲಯಕ್ಕೆ ಹಾಜರಾಗಿ ಹೇಳಿಕೆಯನ್ನು ಕೊಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಈ ಅಪರಾಧಕ್ಕೆ ಸಂಬಂಧಿಸಿ ಯಾರದೇ ಆಕ್ಷೇಪಣೆ ಇರುವುದಿಲ್ಲ ಅಂತ ಪರಿಗಣಿಸಿ ಸದರ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಹೊರಡಿಸಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹೊನ್ನಾವರ ವಿಭಾಗ, ಹೊನ್ನಾವರ

P.R. 1472

## ಅಧಿಕಾರಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹೊನ್ನಾವರ ವಿಭಾಗ, ಹೊನ್ನಾವರ ರವರ ನ್ಯಾಯಾಲಯದಲ್ಲಿ ಕಳ್ಳಸಾಗಾಣಿಕೆ ವಾಹನದ ಕುರಿತು ಪ್ರಕಟಣೆ

**ಕ್ರಮ ಸಂಖ್ಯೆ : ಸಿ3/ಎಫ್ಐಆರ್–2/ವಅಅ ಮಂಕಿ/2005–06, ಹೊನ್ನಾವರ, ದಿನಾಂಕ 10ನೇ ಸೆಪ್ಟೆಂಬರ್, 2012**

ದಿನಾಂಕ : 21–02–2006ರಂದು ರಾತ್ರಿ ಸಮಯಕ್ಕೆ ಮಂಕಿ ವಲಯದ ಬೊಮ್ಮಾರ ರಸ್ತೆಯಿಂದ ಓಮಿನಿ ವಾಹನ ನೋಂದಣಿ ಸಂಖ್ಯೆ : KA-20/3653 ಹಾಗೂ ದ್ವಿಚಕ್ರ ವಾಹನ ಉಮಹಾ KA-31/E-293 ರಲ್ಲಿ ಅಕ್ರಮವಾಗಿ ಸಾಗ ಜಾತಿಯ ನಾಟುಗಳನ್ನು ತುಂಬಿಕೊಂಡು ಕಳ್ಳಸಾಗಾಣಿಕೆಯಲ್ಲಿ ಸಾಗಾಟಪಡಿಸುತ್ತಿದ್ದಾಗ, ವಲಯ ಅರಣ್ಯಾಧಿಕಾರಿ, ಮಂಕಿ ರವರು ಅಟಕಾಯಿಸಿ ಪ್ರಥಮ ಮಾಹಿತಿ ವರದಿ ಸಂಖ್ಯೆ : 2/2005–06, ದಿನಾಂಕ : 21–02–2006ರಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 24(e), 62, 71a ಮತ್ತು ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144ರ ಉಲ್ಲಂಘನೆ ಮೇರೆಗೆ ಗುನ್ನೆ ಪ್ರಕರಣ ದಾಖಲಿಸಿ ವಾಹನ ಸಂಖ್ಯೆ : KA-20/3653 ಹಾಗೂ ದ್ವಿಚಕ್ರ ವಾಹನ ಯಮಹಾ KA-31/E-293ನ್ನು ಅರಣ್ಯ ಉತ್ಪನ್ನ ಸಮೇತ ಜಪ್ತಪಡಿಸಿ ಪಂಚನಾಮೆಯಿಂದ ಅಮಾನತ್ತುಪಡಿಸಿಕೊಂಡು ಅರಣ್ಯ ಕಾಯ್ದೆ 1963ರ ನಿಯಮ 71(ಎ) ಯಿಂದ (ಜಿ) ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳ ಸಮಕ್ಷಮ ಹಾಜರುಪಡಿಸಿರುತ್ತಾರೆ. ಈ ರೀತಿ ವಶಪಡಿಸಿಕೊಂಡಿರುವ ಓಮಿನಿ ವಾಹನ ನೋಂದಣಿ ಸಂಖ್ಯೆ: KA-20/3653ರ ನೋಂದಾಯಿತ ಮಾಲೀಕತ್ವದ ವಿವರಗಳ ಕುರಿತಾಗಿ ದಿನಾಂಕ : 21–02–2006 ರಿಂದ ಇಲ್ಲಿಯವರೆಗೆ ಸಾರಿಗೆ ಪ್ರಾಧಿಕಾರದಲ್ಲಿ ಪತ್ರ ವ್ಯವಹರಿಸಲಾಗಿ, ಈವರೆಗೂ ವಾಹನ ಮಾಲೀಕತ್ವದ ವಿವರಗಳು ಈ ಕಛೇರಿಗೆ ಸ್ವೀಕೃತವಾಗಿರುವುದಿಲ್ಲ. ಅಲ್ಲದೇ, ಸದರ ವಾಹನ ತನ್ನದೆಂದು ಈವರೆಗೂ ಯಾರೂ ಈ ನ್ಯಾಯಾಲಯದಲ್ಲಿ ಕೋರಿಕೆ ಸಲ್ಲಿಸಿರುವುದಿಲ್ಲ.

ಆದ್ದರಿಂದ, ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) ರಿಂದ (ಜಿ) 1 ಮತ್ತು 2ನೇ ತಿದ್ದುಪಡಿ ಪ್ರಕಾರ ಅರಣ್ಯ ಅಪರಾಧ ಪ್ರಕರಣದಲ್ಲಿ ಭಾಗಿಯಾಗಿರುವ ವಾಹನ ಸಂಖ್ಯೆ : KA-20/3653ನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವ ಬಗ್ಗೆ ಸದರ ವಾಹನದ ಹಕ್ಕುಳ್ಳವರು ಮೂಲ ಆರ್.ಸಿ. ಹಾಗೂ ಟ್ಯಾಕ್ಸ್ ಕಾರ್ಡನೊಂದಿಗೆ 15 (ಹದಿನೈದು) ದಿನಗಳ ಒಳಗೆ ಖುದ್ದಾಗಿ ವಕೀಲರ ಮೂಲಕ ಈ ನ್ಯಾಯಾಲಯಕ್ಕೆ ಹಾಜರಾಗಿ ಹೇಳಿಕೆಯನ್ನು ಕೊಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಈ ಅಪರಾಧಕ್ಕೆ ಸಂಬಂಧಿಸಿ ಯಾರದೇ ಆಕ್ಷೇಪಣೆ ಇರುವುದಿಲ್ಲ ಅಂತ ಪರಿಗಣಿಸಿ ಸದರ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಹೊರಡಿಸಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹೊನ್ನಾವರ ವಿಭಾಗ, ಹೊನ್ನಾವರ

P.R. 1473

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಕಛೇರಿ, ನಡವಳಿಗಳು

**ವಿಷಯ :** ಸಮಾಪನೆಯಲ್ಲಿರುವ ಶ್ರೀರಂಗನಾಥ ತೆಂಗಿನ ನಾರಿನ ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ, ನಿ., ಹಾರೋಬೆನವಳ್ಳಿ ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1) ಈ ಕಛೇರಿಯ ಆದೇಶ ಸಂ. ಡಿಆರ್‌ಎಸ್/ಕಾನೂನು-3/ಡಿಎಲ್‌ಎಸ್/ 78/1998-99 ದಿನಾಂಕ : 25-03-1999
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ರವರ ಪತ್ರ ಸಂಖ್ಯೆ : ಸನಿಶಿ24/ಸಮಾಪನೆ/ಸಿಆರ್/2012-13 ದಿನಾಂಕ : 07-09-2012

**ಪ್ರಸ್ತಾವನೆ :-**

ಸಮಾಪನೆಯಲ್ಲಿರುವ ಶ್ರೀ ರಂಗನಾಥ ತೆಂಗಿನ ನಾರಿನ ಉತ್ಪನ್ನ ಮತ್ತು ಮಾರಾಟ ಸಹಕಾರ ಸಂಘ, ನಿ., ಹಾರೋಬೆನವಳ್ಳಿ ಶಿವಮೊಗ್ಗ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಆದೇಶ ಸಂ. ಎಆರ್‌ಎಸ್-17302/1990-91 ದಿನಾಂಕ : 20-08-1990ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ನೊಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು ಶಿವಮೊಗ್ಗ ಇವರನ್ನು ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ದಿನಾಂಕ: 14-08-1999 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ. ಸಮಾಪನಾಧಿಕಾರಿಗು ದಿನಾಂಕ : 04-08-2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಸಂಘದ ಆಸ್ತಿ-ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಉಲ್ಲೇಖ (2)ರ ಪತ್ರದೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ : 31-03-2012 ಕ್ಕೆ ಇದ್ದಂತೆ ಆಸ್ತಿ-ಜವಾಬ್ದಾರಿ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ : 31-08-2012ಕ್ಕೆ ಇದ್ದಂತೆ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ : 04-08-2012ರಂದು ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಳಿಸಿರುತ್ತಾರೆ. ದಿನಾಂಕ : 04-08-2012ರಂದು ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಹಕಾರ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿಆರ್‌ಎಸ್/ಕಾನೂನು-3/ಡಿಎಲ್‌ಎಸ್/78/1998-99/1070, ದಿನಾಂಕ : 30-09-2012**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959. ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011. ದಿನಾಂಕ : 17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಅಶೋಕ. ವೆಂ. ಮೊರಬ. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಶ್ರೀ ರಂಗನಾಥ ತೆಂಗಿನ ನಾರಿನ ಉತ್ಪನ್ನ ಮತು ಮಾರಾಟ ಸಹಕಾರ ಸಂಘ, ನಿ., ಹಾರೋಬೆನವಳ್ಳಿ ಶಿವಮೊಗ್ಗ ತಾಲ್ಲೂಕು ಈ ಸಹಕಾರ ಸಂಘದ ನೊಂದಣಿ ಸಂ : ಎಆರ್‌ಎಸ್-17302/1990-91 ದಿನಾಂಕ : 20-08-1990ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ : 30-09-2012 ರಂದು ನೀಡಲಾಗಿದೆ.

**ಅಶೋಕ ವೆಂ. ಮೊರಬ**
ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**P.R. 1475**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗರವರ ಕಛೇರಿ, ನಡವಳಿಗಳು

**ವಿಷಯ :** ಸಮಾಪನೆಯಲ್ಲಿರುವ ಮಾಜಿ ಸೈನಿಕರ ಗ್ರಾಹಕರ ಸಹಕಾರ ಸಂಘ, ನಿ., ಶಿವಮೊಗ್ಗ ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1) ಈ ಕಛೇರಿಯ ಆದೇಶ ಸಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/ಒಟಿಎಸ್/ 33/1997-98 ದಿನಾಂಕ : 25-03-1998
2) ಈ ಕಛೇರಿಯ ಆದೇಶ ಸಂ. ಡಿಆರ್‌ಎಸ್/ಡಿಎಲ್‌ಎಸ್/ಒಟಿಎಸ್/ 83/1997-98 ದಿನಾಂಕ : 13-12-2006
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ರವರ ಪತ್ರ ಸಂಖ್ಯೆ : ಸನಿಶಿ 24/ಸಮಾಪನೆ/ಸಿಆರ್/2012-13 ದಿನಾಂಕ : 07-09-2012

**ಪ್ರಸ್ತಾವನೆ :–**

ಸಮಾಪನೆಯಲ್ಲಿರುವ ಮಾಜಿ ಸೈನಿಕರ ಗ್ರಾಹಕರ ಸಹಕಾರ ಸಂಘ ನಿ., ಶಿವಮೊಗ್ಗ. ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಆದೇಶ ಸಂ. ಎಆರ್‌ಎಸ್–15405/1987–88 ದಿನಾಂಕ : 15–07–1987ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ನೊಂದಣಿಯಾದ ನಂತರ ಸಂಘದ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯಾಗಿ ಸಹಕಾರ ಸಂಘಗಳ ನಿರೀಕ್ಷಕರು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ ಶಿವಮೊಗ್ಗ ಇವರನ್ನು ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ದಿನಾಂಕ : 24–03–2000 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ: 27–08–2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಸಂಘದ ಆಸ್ತಿ–ಜವಾಬ್ದಾರಿಯನ್ನು ಆದ್ಯತಾ ಪಟ್ಟಿ ಅನುಸಾರ ವಿಲೇವಾರಿ ಮಾಡಿ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಉಲ್ಲೇಖ (3)ರ ಪತ್ರದೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ : 31–03–2012ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ : 27–08–2012ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ : 27–08–2012ರಂದು ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಹಕಾರ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/ಒಟಿಎಸ್/33/1997–98/1072, ದಿನಾಂಕ : 30–09–2012**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959. ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್ಎಂ 2011. ದಿನಾಂಕ : 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಅಶೋಕ. ವೆಂ. ಮೊರಬ. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನೆಯಲ್ಲಿರುವ ಮಾಜಿ ಸೈನಿಕರ ಗ್ರಾಹಕರ ಸಹಕಾರ ಸಂಘ, ನಿ., ಶಿವಮೊಗ್ಗ ಈ ಸಹಕಾರ ಸಂಘದ ನೊಂದಣಿ ಸಂ : ಎಆರ್‌ಎಸ್–15405/1987–88 ದಿನಾಂಕ : 15–07–1987ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ : 30–09–2012 ರಂದು ನೀಡಲಾಗಿದೆ.

**ಅಶೋಕ ವೆಂ. ಮೊರಬ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**P.R. 1476**

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಇಎನ್ 127 ಸಮನ್ವಯ 2012, ಬೆಂಗಳೂರು, ದಿನಾಂಕ : 7–11–12.**

ಶ್ರೀ ಕೆ.ಎನ್. ರಮೇಶ್, ವ್ಯವಸ್ಥಾಪಕ ನಿರ್ದೇಶಕರು, ಪವರ್ ಕಂಪನಿ ಆಫ್ ಕರ್ನಾಟಕ ಲಿಮಿಟೆಡ್, ಬೆಂಗಳೂರು ಅವರನ್ನು ಇಂಧನ ಇಲಾಖೆಯ ಅಧೀನದಲ್ಲಿ ಬರುವ ಈ ಕೆಳಕಾಣಿಸಿದ ನಿಗಮ ಮತ್ತು ಕಂಪನಿಗಳ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ :–

| ಕ್ರಮ ಸಂಖ್ಯೆ | ಕಂಪನಿ/ನಿಗಮದ ಹೆಸರು | ನಿಗಮ/ಕಂಪನಿಯ ಆರ್ಟಿಕಲ್ ಸಂಖ್ಯೆ |
|---|---|---|
| 1. | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು (ಶ್ರೀ ಎಸ್. ಸುಮಂತ್ ಇವರ ಸ್ಥಾನದಲ್ಲಿ) | ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಆರ್ಟಿಕಲ್ 74(ಎ) |
| 2. | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ, (ಶ್ರೀ ಎಸ್. ಸುಮಂತ್ ಇವರ ಸ್ಥಾನದಲ್ಲಿ) | ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಆರ್ಟಿಕಲ್ 74(ಎ) |
| 3. | ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ (ಪ್ರಸ್ತುತ ಖಾಲಿ ಇದೆ) | ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಆರ್ಟಿಕಲ್ 74(ಎ) |

| ಕ್ರಮ ಸಂಖ್ಯೆ | ಕಂಪನಿ/ನಿಗಮದ ಹೆಸರು | ನಿಗಮ/ಕಂಪನಿಯ ಆರ್ಟಿಕಲ್ ಸಂಖ್ಯೆ |
|---|---|---|
| 4. | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು (ಪ್ರಸ್ತುತ ಖಾಲಿ ಇದೆ) | ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಆರ್ಟಿಕಲ್ 72(ಎ) |
| 5. | ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು (ಶ್ರೀ ಎಸ್. ಸುಮಂತ್ ಇವರ ಸ್ಥಾನದಲ್ಲಿ) | ಮೆಮೊರ್‍ಯಾಂಡಂ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಆರ್ಟಿಕಲ್ 51(ಎ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 1479**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–1, ಬಳ್ಳಾರಿ

### ಪ್ರಕಟಣೆ

**ಸಂ : ಕಾಅಬ–1/ಕಾನಪ/ಸಿಆರ್–153/2012/1047, ದಿನಾಂಕ : 3–11–2012.**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ಶ್ರೀ ಗುರಪ್ಪ ತಂದೆ ವೆಂಕಟಮುಡು, ವಯಸ್ಸು : 75 ವರ್ಷ, (ಮೃತನ ತಂದೆ)<br>2. ಶ್ರೀಮತಿ ಲಕ್ಷ್ಮಮ್ಮ ಗಂಡ ಗುರಪ್ಪ, ವಯಸ್ಸು 60 ವರ್ಷ (ಮೃತನ ತಾಯಿ)<br>**ವಾಸ** : 3ನೇ ರಸ್ತೆ, ಜಿ.ಆರ್. ಪಂಚಾನಾಳ್, ಅನಂತಪುರ್ ಆಂಧ್ರ ಪ್ರದೇಶ, ಹಾಲಿ ವಾಸ : ಮುಸ್ತಗಟ್ಟ ಗ್ರಾಮ ಬಳ್ಳಾರಿ ತಾಲ್ಲೂಕು ಮತ್ತು ಜಿಲ್ಲೆ. | **ವಿರುದ್ಧ** | 1. ಸಿ.ಹೆಚ್. ಜಗನ್ ಮೋಹನ್ ರೆಡ್ಡಿ ತಂದೆ ಸಿ.ಹೆಚ್. ಹಚ್ಚಯ್ಯ, ವಯಸ್ಸು 50, ಮಾಲೀಕರು, ಮೆ॥ ಭಾಗ್ಯೋಧಯ ಸ್ಟೋನ್ ಕ್ರಶರ್, ವಿಜಯ ನಗರ ಕಾಲೋನಿ ರಾಮನಗರ, 1ನೇ ಕ್ರಾಸ್ ಎದುರುಗಡೆ, ಹವಾಂಬಾವಿ ಬಳ್ಳಾರಿ.<br>2. ವಿ. ಜಗದೀಶ್ ತಂದೆ ಗೋವರ್ಧನ್ ರಾವ್, ವಯಸ್ಸು 36, ಮಾಲೀಕರು, ಮೆ॥ ಭಾಗ್ಯೋಧಯ ಸ್ಟೋನ್ ಕ್ರಶರ್, ವಾಸ : ವಿದ್ಯಾನಗರ, 2ನೇ ಕ್ರಾಸ್, # ನಂ. 5, ಬಳ್ಳಾರಿ.<br>3. ಟಿ. ನಾಗೇಂದ್ರ ತಂದೆ ಸೂರ್ಯನಾರಾಯಣ, ವಯಸ್ಸು 38 ವರ್ಷ, ಸೂಪರ್‌ವೈಸರ್, ಮೆ॥ ಭಾಗ್ಯೋಧಯ ಸ್ಟೋನ್ ಕ್ರಶರ್, ವಾಸ : ಬಾದನಹಟ್ಟಿ ರಸ್ತೆ, ಕುರುಗೋಡು ಗ್ರಾಮ ಬಳ್ಳಾರಿ ಜಿಲ್ಲೆ. |

ಈ ಮೇಲೆ ತಿಳಿಸಿದ (1 ರಿಂದ 2) ಅರ್ಜಿದಾರರು ಮೃತನ ವಾರಸುದಾರರಾಗಿದ್ದು, ಮೃತ ಬಂಗಾರಪ್ಪ ಮೆ॥ ಭಾಗೋಧಯ ಸ್ಟೋನ್ ಕ್ರಶರ್, ಹಮಾಲಿಯಾಗಿ ಕೆಲಸ ಮಾಡುತ್ತಿದ್ದರೆಂದು ದಿನಾಂಕ : 23–4–2012 ರಂದು ತೀವ್ರ ಗಾಯಗಳಿಗೀಡಾಗಿ ಮೃತಪಟ್ಟಿದ್ದಾನೆಂದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಭಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧೀಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಭಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೇಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ

ನಷ್ಟ ಪರಿಹಾರ ಆಯುಕ್ತರು,

ಬಳ್ಳಾರಿ ಉಪ ವಿಭಾಗ–1, ಬಳ್ಳಾರಿ.

**P.R. 1467**

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಧಿಸೂಚನೆ

**ಸಂ : ಕಾನಪ/ಡಬ್ಲ್ಯೂಸಿಎ/ಸಿಆರ್–40/2012, ದಿನಾಂಕ : 9–11–2012.**

**ಕೋರ್ಟ್ ಸಮ್ಮನ್ಸ್**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1. ಸುಬ್ರಮಣಿ ಬಿನ್ ಬುಡ್ಡಣ್ಣ<br>2. ಶ್ರೀಮತಿ ಮಲ್ಲಿಕಮ್ಮ, ಕೋಂ ಸುಬ್ರಮಣಿ, ಇಬ್ಬರ ವಾಸ : ಈಸೂರು, ಶಿಕಾರಿಪುರ ತಾ: | 1. ಪ್ರೇಮ್ ಕುಮಾರ್ ಬಿನ್ ಧನಪಾಲಪ್ಪ ಮನೆ ನಂ. 41, ನರ್ಸ್ ಕ್ವಾಟ್ರಸ್ 9, ಶರಾವತಿ ನಗರ, ಶಿವಮೊಗ್ಗ.<br>2. ಶ್ರೀರಾಮ್ ಜನರಲ್ ಇನ್ಸೂರೆನ್ಸ್ ಕಂ.ಲಿ., ನಂ. 8, 2ನೇ ಮಹಡಿ, ಮೊನಾರ್ಕ್ ಛೇಂಬರ್ಸ್ ಇನ್ ಫ್ಯಾಂಟ್ರಿ ರಸ್ತೆ, ಬೆಂಗಳೂರು |

ಅರ್ಜಿದಾರರು ದಿ : ಕುಮಾರ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತವಾಗಿದ್ದಾಗ ದಿನಾಂಕ : 6–8–2012 ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಂ.ಪಿ. ವಿಶ್ವನಾಥ್,**
ಕಾರ್ಮಿಕ ಪರಿಹಾರ ಆಯುಕ್ತರು,
ಕಾರ್ಮಿಕ ಪರಿಹಾರ ಆಯುಕ್ತರವರ
ನ್ಯಾಯಾಲಯ, ಶಿವಮೊಗ್ಗ.

P.R. 1499

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪ ವಿಭಾಗ, ಹಾಸನ

### ಪ್ರಕಟಣೆ

**ಸಂ : ಕಾನಪ: ಎಫ್: ಎಸ್‌ಆರ್ 29/2012, ದಿನಾಂಕ : 6–12–2012.**

| ಅರ್ಜಿದಾರರು | ಪ್ರತಿವಾದಿಗಳು |
|---|---|
| ಶ್ರೀ ಮಂಜೇಗೌಡ ಬಿನ್ ದಿ. ವೆಂಕಟೇಗೌಡ, ಮತ್ತು ಇತರರು ಹಾಸನ ತಾಲ್ಲೂಕು, ಹಾಸನ ಜಿಲ್ಲೆ | 1. ರಂಗಸ್ವಾಮಿ ಬಿನ್ ತಿಮ್ಮೇಗೌಡ ಕಾರೇಕೆರೆ ಗ್ರಾಮ, ಶಾಂತಿಗ್ರಾಮ ಹೋಬಳಿ, ಹಾಸನ ತಾಲ್ಲೂಕು, ಹಾಸನ ಜಿಲ್ಲೆ<br>2. ವ್ಯವಸ್ಥಾಪಕರು, ಟಾಟಾ ಎ.ಐ.ಜಿ. ಜನರಲ್ ಇನ್ಸುರೆನ್ಸ್ ಕಂ. ಲಿ, 2ನೇ ಮಹಡಿ, ಜೆ.ಪಿ. ಮತ್ತು ದೇವಿ ಜಂಬೂಕೇಶ್ವರ ಆರ್ಕೇಡ್, ನಂ. 69, ಮಿಲ್ಲರ್ ರಸ್ತೆ, ಬೆಂಗಳೂರು–560 052. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಲಕ್ಷೇಗೌಡರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ : 30–8–2012ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಉಪವಿಭಾಗ, ಹಾಸನ.

P.R. 1554

## LAW, JUSTICE AND HUMAN RIGHTS SECRETARIAT

### NOTIFICATION

**No. LAW 70 KLM 2011, Bangalore, Dated : 23-11-2012.**

In exercise of the powers conferred by clause 2(1)(j) and clause 7(1)(f) of the Schedule to the National Law School of India Act 1986 (Karnataka Act No. 22 of 1986), the Government of Karnataka are pleased to nominate Justice Shri. Shivraj V. Patil, Retired Supreme Court Judge, as Member of the General Council and Executive Council of National Law School of India University, Bangalore, for a period of 3 years with immediate effect.

P.R. 1520

By Order and in the name of the Governor of Karnataka
**K.N. PHANEENDRA**
Principal Secretary to Government
Department of Law, Justice and Human Rights.

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

**No. DES 38 PWX 2012, dated 4-9-2012**

**State : Karnataka** **Base : 1887-88=100** **Month : June 2012**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| | **FOOD :** | | | | | | | | | | | |
| I. | (a) Cereals & Products | 762 | 692 | 822 | 729 | 685 | 743 | 624 | 727 | 619 | 840 | 611 |
| | (b) Pulses & Products | 587 | 692 | 698 | 740 | 647 | 634 | 659 | 693 | 637 | 702 | 628 |
| | (c) Oil & Fats | 368 | 415 | 394 | 383 | 510 | 410 | 382 | 446 | 276 | 486 | 424 |
| | (d) Meat, Fish & Eggs | 810 | 878 | 898 | 856 | 959 | 830 | 764 | 869 | 650 | 1016 | 826 |
| | (e) Milk & Products | 655 | 534 | 693 | 645 | 567 | 686 | 546 | 658 | 615 | 617 | 518 |
| | (f) Condiments & Spices | 444 | 518 | 837 | 884 | 383 | 522 | 552 | 583 | 511 | 573 | 537 |
| | (g) Vegetables & Fruits | 753 | 742 | 772 | 895 | 708 | 746 | 796 | 706 | 705 | 617 | 919 |
| | (h) Other Food | 493 | 797 | 650 | 650 | 583 | 502 | 619 | 568 | 493 | 528 | 519 |
| | **FOOD GROUP INDEX** | 651 | 677 | 744 | 714 | 632 | 646 | 621 | 690 | 574 | 714 | 609 |
| II. | Pan, Supari, Tobacco & Intoxicants | 545 | 794 | 714 | 533 | 542 | 646 | 692 | 591 | 431 | 559 | 716 |
| III. | Fuel & Light | 462 | 460 | 593 | 643 | 566 | 547 | 538 | 625 | 437 | 660 | 410 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing Bedding & Footwear | 284 | 508 | 387 | 396 | 375 | 357 | 521 | 639 | 309 | 648 | 234 |
| VI. | **Miscellaneous :** | | | | | | | | | | | |
| | (a) Medical Care | 663 | 914 | 498 | 457 | 359 | 287 | 531 | 552 | 353 | 442 | 262 |
| | (b) Education, Recreation & Amusement | 603 | 649 | 933 | 317 | 675 | 670 | 603 | 546 | 773 | 789 | 809 |
| | (c) Transport & Communication | 692 | 676 | 657 | 526 | 667 | 696 | 603 | 578 | 762 | 494 | 639 |
| | (d) Personal Care & effects | 376 | 430 | 481 | 378 | 524 | 384 | 407 | 448 | 443 | 382 | 374 |
| | (e) Others | 439 | 474 | 595 | 571 | 433 | 391 | 401 | 598 | 349 | 582 | 360 |
| | Miscellaneous Group | 507 | 573 | 619 | 446 | 523 | 449 | 486 | 542 | 530 | 529 | 459 |
| | **GENERAL INDEX** | 519 | 562 | 602 | 559 | 511 | 507 | 532 | 589 | 486 | 602 | 442 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**JOINT DIRECTOR,**
Directorate of Economics & Statistics
Government of Karnataka, Bangalore.

**P.R. 1516**

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

**No. DES 38 PWX 2012, dated 25-9-2012**

**State : Karnataka** **Base : 1887-88=100** **Month : July 2012**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| | **FOOD :** | | | | | | | | | | | |
| I. | (a) Cereals & Products | 776 | 727 | 848 | 765 | 709 | 774 | 638 | 755 | 634 | 851 | 611 |
| | (b) Pulses & Products | 600 | 729 | 746 | 734 | 691 | 660 | 686 | 709 | 635 | 752 | 690 |
| | (c) Oil & Fats | 368 | 415 | 397 | 384 | 488 | 414 | 394 | 446 | 279 | 489 | 447 |
| | (d) Meat, Fish & Eggs | 833 | 904 | 895 | 869 | 965 | 829 | 780 | 870 | 655 | 1016 | 859 |
| | (e) Milk & Products | 658 | 534 | 693 | 674 | 567 | 686 | 546 | 658 | 615 | 627 | 518 |
| | (f) Condiments & Spices | 453 | 536 | 836 | 867 | 424 | 529 | 551 | 579 | 509 | 611 | 588 |
| | (g) Vegetables & Fruits | 797 | 708 | 807 | 886 | 666 | 675 | 835 | 722 | 673 | 617 | 880 |
| | (h) Other Food | 501 | 806 | 639 | 653 | 611 | 512 | 626 | 573 | 490 | 558 | 541 |
| | FOOD GROUP INDEX | 665 | 693 | 758 | 726 | 647 | 656 | 634 | 704 | 576 | 730 | 622 |
| II. | Pan, Supari, Tobacco & Intoxicants | 549 | 794 | 729 | 533 | 542 | 673 | 692 | 602 | 431 | 587 | 716 |
| III. | Fuel & Light | 466 | 460 | 593 | 644 | 566 | 547 | 538 | 625 | 434 | 660 | 410 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing Bedding & Footwear | 285 | 525 | 394 | 396 | 380 | 369 | 527 | 639 | 309 | 649 | 234 |
| VI. | **Miscellaneous :** | | | | | | | | | | | |
| | (a) Medical Care | 669 | 914 | 498 | 457 | 359 | 287 | 531 | 552 | 353 | 442 | 262 |
| | (b) Education, Recreation & Amusement | 603 | 649 | 933 | 317 | 675 | 670 | 605 | 546 | 773 | 789 | 809 |
| | (c) Transport & Communication | 692 | 676 | 656 | 526 | 667 | 692 | 603 | 752 | 762 | 494 | 709 |
| | (d) Personal Care & effects | 377 | 430 | 482 | 370 | 524 | 414 | 413 | 448 | 443 | 383 | 383 |
| | (e) Others | 450 | 474 | 597 | 571 | 433 | 409 | 409 | 599 | 349 | 582 | 368 |
| | Miscellaneous Group | 512 | 573 | 620 | 445 | 523 | 461 | 489 | 552 | 530 | 530 | 472 |
| | **GENERAL INDEX** | 528 | 572 | 611 | 565 | 519 | 515 | 540 | 598 | 487 | 612 | 450 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**JOINT DIRECTOR,**
Directorate of Economics & Statistics
Government of Karnataka, Bangalore.

**P.R. 1517**

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

**No. DES 38 PWX 2012, dated 30-10-2012**

**State : Karnataka** **Base : 1887-88=100** **Month : August 2012**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| | **FOOD :** | | | | | | | | | | | |
| I. | (a) Cereals & Products | 771 | 768 | 870 | 807 | 710 | 773 | 676 | 785 | 644 | 820 | 626 |
| | (b) Pulses & Products | 656 | 788 | 820 | 743 | 757 | 737 | 700 | 739 | 657 | 759 | 749 |
| | (c) Oil & Fats | 379 | 416 | 420 | 384 | 498 | 414 | 429 | 464 | 268 | 496 | 486 |
| | (d) Meat, Fish & Eggs | 871 | 898 | 898 | 869 | 965 | 843 | 814 | 871 | 687 | 1032 | 859 |
| | (e) Milk & Products | 670 | 535 | 696 | 681 | 567 | 686 | 546 | 658 | 615 | 627 | 518 |
| | (f) Condiments & Spices | 488 | 533 | 825 | 864 | 395 | 513 | 557 | 598 | 496 | 639 | 568 |
| | (g) Vegetables & Fruits | 691 | 624 | 734 | 849 | 666 | 639 | 794 | 625 | 659 | 701 | 879 |
| | (h) Other Food | 540 | 824 | 670 | 659 | 621 | 544 | 634 | 590 | 512 | 566 | 561 |
| | **FOOD GROUP INDEX** | 671 | 707 | 772 | 738 | 653 | 664 | 652 | 716 | 588 | 729 | 636 |
| II. | Pan, Supari, Tobacco & Intoxicants | 565 | 787 | 727 | 540 | 570 | 683 | 692 | 650 | 434 | 587 | 716 |
| III. | Fuel & Light | 504 | 483 | 593 | 644 | 566 | 547 | 538 | 625 | 434 | 660 | 410 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing Bedding & Footwear | 283 | 525 | 393 | 396 | 380 | 372 | 533 | 639 | 309 | 649 | 234 |
| VI. | **Miscellaneous :** | | | | | | | | | | | |
| | (a) Medical Care | 669 | 914 | 500 | 457 | 359 | 287 | 531 | 552 | 356 | 446 | 262 |
| | (b) Education, Recreation & Amusement | 596 | 649 | 944 | 319 | 675 | 786 | 605 | 546 | 780 | 1118 | 809 |
| | (c) Transport & Communication | 692 | 676 | 655 | 526 | 667 | 691 | 603 | 752 | 762 | 494 | 709 |
| | (d) Personal Care & effects | 377 | 439 | 509 | 371 | 524 | 416 | 413 | 470 | 439 | 400 | 400 |
| | (e) Others | 449 | 474 | 597 | 583 | 433 | 410 | 428 | 607 | 349 | 582 | 370 |
| | Miscellaneous Group | 511 | 575 | 631 | 448 | 523 | 489 | 493 | 560 | 530 | 586 | 477 |
| | **GENERAL INDEX** | 534 | 580 | 620` | 572 | 523 | 525 | 551 | 608 | 494 | 620 | 457 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**JOINT DIRECTOR,**
Directorate of Economics & Statistics
Government of Karnataka, Bangalore.

**P.R. 1518**

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

**No. DES 38 PWX 2012, dated 15-11-2012**

**State : Karnataka** **Base : 1887-88=100** **Month : Sept. 2012**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| | **FOOD :** | | | | | | | | | | | |
| I. | (a) Cereals & Products | 789 | 813 | 880 | 830 | 730 | 763 | 709 | 806 | 654 | 847 | 628 |
| | (b) Pulses & Products | 657 | 791 | 823 | 775 | 755 | 742 | 700 | 794 | 701 | 740 | 762 |
| | (c) Oil & Fats | 374 | 416 | 423 | 384 | 508 | 420 | 461 | 483 | 269 | 500 | 486 |
| | (d) Meat, Fish & Eggs | 892 | 883 | 898 | 830 | 951 | 856 | 842 | 875 | 720 | 1047 | 859 |
| | (e) Milk & Products | 673 | 535 | 696 | 684 | 567 | 686 | 546 | 658 | 615 | 627 | 518 |
| | (f) Condiments & Spices | 499 | 539 | 848 | 864 | 393 | 516 | 569 | 597 | 493 | 646 | 583 |
| | (g) Vegetables & Fruits | 579 | 590 | 720 | 781 | 590 | 615 | 667 | 637 | 581 | 677 | 851 |
| | (h) Other Food | 568 | 821 | 673 | 681 | 621 | 546 | 634 | 607 | 523 | 570 | 563 |
| | **FOOD GROUP INDEX** | 672 | 717 | 778 | 742 | 653 | 662 | 660 | 732 | 597 | 739 | 636 |
| II. | Pan, Supari, Tobacco & Intoxicants | 572 | 787 | 781 | 536 | 571 | 752 | 692 | 650 | 447 | 587 | 716 |
| III. | Fuel & Light | 511 | 483 | 593 | 644 | 566 | 562 | 538 | 625 | 434 | 660 | 449 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing Bedding & Footwear | 287 | 528 | 396 | 396 | 380 | 380 | 533 | 639 | 309 | 652 | 234 |
| VI. | **Miscellaneous :** | | | | | | | | | | | |
| | (a) Medical Care | 669 | 914 | 500 | 457 | 359 | 309 | 531 | 552 | 357 | 456 | 262 |
| | (b) Education, Recreation & Amusement | 607 | 651 | 951 | 320 | 675 | 888 | 605 | 546 | 780 | 1118 | 809 |
| | (c) Transport & Communication | 692 | 676 | 655 | 526 | 667 | 691 | 603 | 752 | 762 | 494 | 709 |
| | (d) Personal Care & effects | 378 | 438 | 559 | 379 | 524 | 420 | 413 | 470 | 439 | 402 | 400 |
| | (e) Others | 449 | 474 | 597 | 586 | 447 | 423 | 467 | 607 | 349 | 583 | 370 |
| | Miscellaneous Group | 513 | 576 | 649 | 450 | 527 | 522 | 500 | 560 | 530 | 587 | 477 |
| | **GENERAL INDEX** | 536 | 586 | 628 | 574 | 524 | 534 | 557 | 617 | 500 | 626 | 460 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**JOINT DIRECTOR,**
Directorate of Economics & Statistics
Government of Karnataka, Bangalore.

**P.R. 1519**

## OFFICE OF THE ASST. COMMISSIONER OF COMMERCIAL TAXES,
## LOCAL VAT OFFICE-040, BANGALORE

**Nofified Authority Under Rule 6(i) of the CST (Karnataka) Rules 1957**

**NOTIFICATION**

**No. ACCT/LVO-040/09-10, Dated : 28-11-2012.**

By Virtue of the provisions of Rule 12 (2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-F described below are declared to be obsolete and Invalid.

| Sl. No. | Number (including code No.) of declaration Forms Lost Destroyed or stolen | Name and address of the dealer to whom declaration Forms/is/are issued by the department with date of F form issue | Registration Certification No. of the dealer under CST Act, 1956 | The address of the dealer to whom the declaration is/ are sent | Date of issue of Form by the dealer | Whether Lost/ Stolen destroy Ed | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | 'F' Form Sl. No. 03H 381121 to 03H 381132 in Original & Duplicate | M/s Cisco System (India) Pvt. Ltd, DivyaShree Chambers 'B' wing No. 11, 'o' shaugnessey Road, off Langford road, Bangalore-560027 | TIN 29430073253 | M/s Cisco System India Pvt. Ltd, D.C. House '5' Chunnawala Estate, Anderi krupa road, Anderi (east), Mumbai-400059 | 28-11-2006 | Lost | Stock received from 1-4-2005 to 31-3-2006 total amount of Rs. 16,06,40,551 |

P.R. 1525

**S.G. GOWDRU**
Asst. Commissioner of Commercial Taxes,
Lacal VAT Office-040, LVO-IV, Bangalore.

## ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಪ್ರಕಟಣೆ**

**ಪ್ರಕರಣ ಸಂ : ಕಾಅಕೊ:ಕಾನಪ : ಮರಣ ಪ್ರಕರಣ–85/2012, ದಿನಾಂಕ : 4–12–2012.**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1. ಫಕ್ರಮ್ಮ ಗಂಡ ಲೇಟ್ ಮೊಹಮದ್ ರಫೀ<br>2. ಕುಮಾರಿ ಮರ್ಧಾನ್‌ಬೀ ತಂದೆ ಲೇಟ್ ಮೊಹಮದ್ ರಫೀ<br>3. ಕು : ಮೌಲಾ ತಂದೆ ಲೇಟ್ ಮರ್ಧಾನ್‌ಬೀ ತಂದೆ ಮೊಹಮದ್ ರಫೀ\<br>4. ಕುಮಾರಿ ಫರೀದಾಬೇಗಂ ತಂದೆ ಬಾಷುಸಾಬ್<br>5. ರಮಾಜಾನ್‌ಬೀ ಗಂಡ ಬಾಷುಸಾಬ್<br>6. ಬಾಷುಸಾಬ್ ತಂದೆ ಮರ್ಧಾನ್ ಸಾಬ್<br>ಎಲ್ಲಾ ಅರ್ಜಿದಾರರ ವಾಸ : ಶಿವಪುರ, ತಾ:ಜಿ : ಕೊಪ್ಪಳ | 1. ವೈ. ರವೀಂದ್ರ ರಾವ್ ತಂದೆ ವೈ.ವಿ. ಮೊಹನ್ ರಾವ್ ಟ್ರಾಕ್ಟರ್ ಮತ್ತು ಟ್ರಾಲಿ ಮಾಲೀಕರು, ಕೆಎ–37/ಟಿ–7392 ಮತ್ತು ಕೆಎ–37/4137 ವಾಸ : ಶಿವಪುರ ತಾ:ಜಿ: ಕೊಪ್ಪಳ<br>2. ದಿ ಡಿವಿಜನಲ್ ಮ್ಯಾನೇಜರ್, ಮೆ॥ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ. ಹೊಸಪೇಟೆ. |

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಫೀ ತಂದೆ ಬಾಷುಸಾಬ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ, ದಿನಾಂಕ : 28–7–2012 (ಪಿ.ಎಂ. ರಿಪೋರ್ಟ್‌ನಂತೆ) ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ : ರಫೀ ತಂದೆ ಬಾಷುಸಾಬ್ ಇವರ ವಾರಸದಾರರಾದ 1) ಫಕ್ರಮ್ಮ, 2) ಮರ್ದಾನ್‌ಬೀ, 3) ಮೌಲಾ, 4) ಫರೀದಾಬೇಗಂ, 5) ರಮಜಾನ್‌ಬೀ ಮತ್ತು 6) ಬಾಷುಸಾಬ್ ಎಲ್ಲಾ ಅರ್ಜಿದಾರರ ವಿಳಾಸ : ಶಿವಪುರ ತಾ:ಜಿ: ಕೊಪ್ಪಳ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನು ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

**ಕೆ.ಪಿ. ಮುನಿಯಪ್ಪ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

P.R. 1552

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ,**

**ಬೃಹತ್ ಕಾಮಗಾರಿ ವಿಭಾಗ, ಚಿತ್ರದುರ್ಗ**

**ಪ್ರಕಟಣೆ**

**ಕ್ರಮಾಂಕ ಕಾನಿಇಂ/ಸಇಂ(ವಿ)/ಬೃಕಾವಿ/ಚಿ–12–13/1208–10, ದಿನಾಂಕ: 17–11–2012.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮವು ವಿದ್ಯುತ್ ಸರಬರಾಜು ಕಾಯ್ದೆ 2003ರ ಸೆಕ್ಷನ್ 67 ರಡಿಯಲ್ಲಿ ಯೋಜನೆಯನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2) ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಗಳ ವಿವರಗಳು ಈ ಕೆಳಕಂಡಂತಿವೆ.

1. ಕೆಲಸದ ಹೆಸರು : ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕು ಉದ್ದೇಶಿತ ಬೆಂಕಿಕೆರೆ 220/66 ಕೆ.ವಿ. ಸ್ವೀಕರಣಾ ಕೇಂದ್ರದಿಂದ ಉದ್ದೇಶಿತ ಮಲ್ಲಾಡಿಹಳ್ಳಿ 66/11 ಕೆ.ವಿ. ಉಪ ಕೇಂದ್ರದವರೆಗೆ ಡಿಸಿ ಟವರ್‌ಗಳ ಮೇಲೆ ಉದ್ದೇಶಿತ 66 ಕೆ.ವಿ. ಎಸ್.ಸಿ. ಮಾರ್ಗದ ನಿರ್ಮಾಣ.

ಪ್ರಮುಖ ಲಕ್ಷಣಗಳು : ವಿದ್ಯುತ್ ಮಾರ್ಗಗಳ ನಷ್ಟದಲ್ಲಿ ಇಳಿಕೆ, ವೋಲ್ಟೇಜ್ ಸುಧಾರಣೆ ಮತ್ತು ಮಲ್ಲಾಡಿಹಳ್ಳಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸಲು ಮತ್ತು ಮಲ್ಲಾಡಿಹಳ್ಳಿ ಸಮೀಪದ ಮತ್ತು ಹಾಲಿ ಇರುವ 11 ಕೆವಿ ಮಾರ್ಗಗಳ ಸುತ್ತಮುತ್ತಲ ಹಳ್ಳಿಗಳಿಗೆ ವಿದ್ಯುತ್ ಹೊರೆ ಕಡಿಮೆ ಮಾಡುವುದು.

ವಿದ್ಯುತ್ ಮಾರ್ಗಹಾದು ಹೋಗುವ ಪ್ರದೇಶಗಳು : ಬೆಂಕಿಕೆರೆ, ಹೆಬ್ಬಲಗೆರೆ, ಮಾದಾಪುರ, ದುಮ್ಮಿ ಮತ್ತು ಮಲ್ಲಾಡಿಹಳ್ಳಿ ಗ್ರಾಮಗಳ ಸರಹದ್ದು.

ವಿದ್ಯುತ್ ಮಾರ್ಗದ ಅಂದಾಜು ಉದ್ದ : 11.467 ಕಿ.ಮೀ.

ಯೋಜನೆಯ ಅಂದಾಜು ವೆಚ್ಚ : ರೂ. 193.48 ಲಕ್ಷಗಳು.

2. ಕೆಲಸದ ಹೆಸರು : ಉದ್ದೇಶಿತ 66 ಕೆ.ವಿ. ಡಿ.ಸಿ. ಮಾರ್ಗ ಹಾಲಿ ಇರುವ ಪಂಡರಹಳ್ಳಿ – ಹೊಳಲ್ಕೆರೆ ಎಸ್.ಸಿ. ಮಾರ್ಗದಿಂದ ಉದ್ದೇಶಿತ 66/11 ಕೆ.ವಿ. ಚಿತ್ರಹಳ್ಳಿ ವಿದ್ಯುತ್ ಉಪ ಕೇಂದ್ರದವರೆಗೆ 66 ಕೆವಿ ಮಾರ್ಗದ ನಿರ್ಮಾಣ.

ಪ್ರಮುಖ ಲಕ್ಷಣಗಳು : ವಿದ್ಯುತ್ ಮಾರ್ಗಗಳ ನಷ್ಟದಲ್ಲಿ ಇಳಿಕೆ, ವೋಲ್ಟೇಜ್ ಸುಧಾರಣೆ ಮತ್ತು ಚಿತ್ರಹಳ್ಳಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸಲು ಮತ್ತು ಚಿತ್ರಹಳ್ಳಿ ಸಮೀಪದ ಮತ್ತು ಹಾಲಿ ಇರುವ 11 ಕೆವಿ ಮಾರ್ಗಗಳ ಸುತ್ತ ಮುತ್ತಲ ಹಳ್ಳಿಗಳಿಗೆ ವಿದ್ಯುತ್ ಹೊರೆ ಕಡಿಮೆ ಮಾಡುವುದು.

ವಿದ್ಯುತ್ ಮಾರ್ಗ ಹಾದು ಹೋಗುವ ಪ್ರದೇಶಗಳು : ಚಿತ್ರಹಳ್ಳಿ, ಈಚಲಗಟ್ಟ ಗ್ರಾಮಗಳ ಸರಹದ್ದು.

ವಿದ್ಯುತ್ ಮಾರ್ಗದ ಅಂದಾಜು ಉದ್ದ : 0.91 ಕಿ.ಮೀ.

ಯೋಜನೆಯ ಅಂದಾಜು ವೆಚ್ಚ : ರೂ. 34.83 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮದ ಅನುಬಂಧ 164ರ ಭಾರತೀಯ ಟೆಲಿಗ್ರಾಫ್ ಅಧಿನಿಯಮದ ಭಾಗ–III ರ (ಭಾರತೀಯ ಟೆಲಿಗ್ರಾಫ್ ಕಾಯ್ದೆ 1885ರ 13) ಅನ್ವಯ, ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಸಂಬಂಧಿಸಿದಂತೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಕೆಳಸಹಿದಾರರಿಗೆ ಈ ಪ್ರಕಟಣೆಯ ಪ್ರಕಟವಾದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸುವುದು ಹಾಗೂ ಸ್ವೀಕೃತಿ ಪಡೆಯುವುದು.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೃಹತ್ ಕಾಮಗಾರಿ ವಿಭಾಗ,
ಯಕ.ವಿ.ಪ್ರ.ನಿ.ನಿ. ಚಿತ್ರದುರ್ಗ.

P.D. 117

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಉಪ ವಿಭಾಗ, ಹಾಸನ

### ಪ್ರಕಟಣೆ

**ಸಂಖ್ಯೆ: ಕಾನಪ/ಎಫ್/ಎಸ್.ಆರ್–28/2012, ದಿನಾಂಕ: 27–10–2012**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1. ಮೊಹೀಯುದ್ದೀನ್ ಬಿನ್ ಇಬ್ರಾಹಿಂ<br>2. ಹಮೀದ್ ಬಿ. ಕೋಂ ಮೊಹೀಯುದ್ದೀನ್<br>3. ಹಸೀನಾ ಬಾನು ಬಿನ್ ಮೊಹೀಯುದ್ದೀನ್<br>4. ಮೈಮುನ ಬಾನು ಬಿನ್ ಮೊಹೀಯುದ್ದೀನ್ ತಣ್ಣೀರುಹಳ್ಳ, ಹಾಸನ | ವಿರುದ್ಧ | 1. ಕುಮಾರಸ್ವಾಮಿ ಬಿನ್ ಪುಟ್ಟೇಗೌಡ ನಂ. 12, ದೋರನಹಳ್ಳಿ ಗ್ರಾಮ, ದುಂಡನಾಯಕನಹಳ್ಳಿ ಪೋಸ್ಟ್, ಹಾಸನ<br>2. ವ್ಯವಸ್ಥಾಪಕರು, ಶ್ರೀ ರಾಮ ಜನರಲ್ ಇನ್ಸುರೆನ್ಸ್ ಕಂಪನಿ ಲಿ., ಬೆಂಗಳೂರು. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಇಬ್ರಾಹಿಂ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 07–10–2010 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್,**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕಾಧಿಕಾರಿಗಳು,
ಹಾಸನ ಜಿಲ್ಲೆ, ಹಾಸನ.

PR. 1435

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಉಪ ವಿಭಾಗ, ಹಾಸನ

### ಪ್ರಕಟಣೆ

**ಸಂಖ್ಯೆ: ಕಾನಪ/ಎಫ್/ಎಸ್.ಆರ್–27/2012, ದಿನಾಂಕ: 20–10–2012**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1. ಶ್ರೀಮತಿ ಲತಾ @ ಪುಷ್ಪಲತಾ ಕೋಂ. ಲೇಟ್ ವೆಂಕಟೇಶ್<br>2. ಯಶೋಧ ಬಿನ್ ಲೇಟ್ ವೆಂಕಟೇಶ್<br>3. ಪೂರ್ವಿ ಬಿನ್ ಲೇಟ್ ವೆಂಕಟೇಶ್<br>4. ರಾಜು ಬಿನ್ ತಿಮ್ಮೇಗೌಡ ಯಶೋಧಮ್ಮ ಕೋಂ ರಾಜು ತೇಜೂರು ಗ್ರಾಮ ಅರಕಲಗೂಡು ತಾ. | ವಿರುದ್ಧ | 1. ನಿಂಗರಾಜು @ ರಾಜು ಬಿನ್ ಹರಿವೇಗೌಡ ನಂ. ಬಿ 10 ಡಿಡಿ ಯುಟಿಟಿಎಲ್ ಇಂಡಸ್ಟ್ರಿಯಲ್ ಸಭ್ ರಭ್, ಯಶವಂತಪುರ, ಬೆಂಗಳೂರು.<br>2. ದಿ ಮ್ಯಾನೇಜರ್, ರಿಲಾಯನ್ಸ್ ಜನರಲ್ ಇನ್ಸುರೆನ್ಸ್ ಕಂ. ಲಿಮಿಟೆಡ್, ಎನ್.ಆರ್. ಸರ್ಕಲ್ ಹೆಚ್.ಎಮ್. ಪುರ ರೋಡ್, ಹಾಸನ |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ವೆಂಕಟೇಶ್ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ 10–07–2010 ರಂದು ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್,**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕಾಧಿಕಾರಿಗಳು,
ಹಾಸನ ಜಿಲ್ಲೆ, ಹಾಸನ.

PR. 1436

